## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 14 |
| ಸದಸ್ಯರ ಹೆಸರು | : | ಶ್ರೀ ಬಸವರಾಜ ಪಾಟೀಲ್ ಇಟಗಿ<br>(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 09-12-2020. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ,<br>ಲೋಕೋಪಯೋಗಿ ಇಲಾಖೆ |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕಳೆದ 4 ವರ್ಷಗಳಿಂದ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ದೇವದುರ್ಗದಿಂದ ಗೂಗಲ್ ಮತ್ತು ಗೂಗಲ್‌ನಿಂದ ಸಂಕೇಶ್ವರಾಳ ರಸ್ತೆ ಕಾಮಗಾರಿ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು ಬಂದಿದೆ. |
| ಆ) | ಬಂದಿದ್ದಲ್ಲಿ, ಕಾಮಗಾರಿ ವಿಳಂಬಕ್ಕೆ ಕಾರಣವೇನು; ತ್ವರಿತ ಗತಿಯಲ್ಲಿ ಕಾಮಗಾರಿಯನ್ನು ಕೈಗೊಳ್ಳಲು ಸರ್ಕಾರ ತೆಗೆದುಕೊಂಡ ಕ್ರಮವೇನು? | ಸರ್ಕಾರದ ಆದೇಶ ಸಂ ಲೋಇ 207 ಸಿಐಎಸ್ 2018, ಬೆಂಗಳೂರು, ದಿನಾಂಕ:02-11-2019 ರನ್ವಯ ಈ ಕೆಳಕಂಡ ಕಾಮಗಾರಿಗಳನ್ನು ರೂ.110.20 ಕೋಟಿಗಳ ಮೊತ್ತದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆಯನ್ನು ಸರ್ಕಾರ ನೀಡಿರುತ್ತದೆ.<br><br>(1) ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಜಾಲಹಳ್ಳಿ ಗುಗಲ್ ವಾಯಾ ಅರಕೇರಾ, ಸುಂಕೇಶ್ವರಹಾಳ, (ಜಿ.ಮು.ರ) ರಸ್ತೆ ಕಿ.ಮೀ.0.00 ರಿಂದ 71.15 (ಆಯ್ದ ಭಾಗಗಳಲ್ಲಿ) ವರೆಗೆ ರಸ್ತೆ ಮರು ಸುಧಾರಣೆ ಮಾಡುವುದು ಅಂದಾಜು ಮೊತ್ತ ರೂ.62.10 ಕೋಟಿಗಳು<br><br>(2) ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ದೇವದುರ್ಗ ದಿಂದ ಗೂಗಲ್ ವಾಯಾ ಕೊಪ್ಪರ (ಜಿ.ಮು.ರ) ರಸ್ತೆ ಕಿ.ಮೀ.0.00 ರಿಂದ 28.00 ವರೆಗೆ ರಸ್ತೆ ಮರು ಸುಧಾರಣೆ ಮಾಡುವುದು ಅಂದಾಜು ಮೊತ್ತ ರೂ 35.50 ಕೋಟಿಗಳು<br><br>(3) ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಅರಕೇರಾ ಕ್ರಾಸ್‌ದಿಂದ ವಾಯಾ ಗಲಗ್ ನಾರಬಂಡಾ, ರಸ್ತೆ ಕಿ.ಮೀ.0.00 ರಿಂದ 28.20 (ಆಯ್ದ ಭಾಗಗಳಲ್ಲಿ) ವರೆಗೆ ರಸ್ತೆ ಸುಧಾರಣೆ ಮಾಡುವುದು ಅಂದಾಜು ಮೊತ್ತ ರೂ.12.60 ಕೋಟಿಗಳು<br><br>ಮೇಲ್ಕಂಡ ಕಾಮಗಾರಿಗಳಿಗೆ ದಿನಾಂಕ:02.03.2020 ರಂದು ರಾಜ್ಯಮಟ್ಟದ ತಾಂತ್ರಿಕ ಸಲಹಾ ಮತ್ತು ಅಂದಾಜು ಪಟ್ಟಿ ಪರಿಶೀಲನಾ ಸಮಿತಿಯು ಸಹಮತಿ ನೀಡಿರುತ್ತದೆ.<br><br>ಮೇಲ್ಕಂಡ 03 ಕಾಮಗಾರಿಗಳಿಗೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಈಶಾನ್ಯ) ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. |

| | | |
|---|---|---|
| | | ಇವುಗಳ ಪೈಕಿ ಕ್ರಮ ಸಂಖ್ಯೆ: (1) ರಲ್ಲಿರುವ ಕಾಮಗಾರಿಗೆ ಪ್ರತ್ಯೇಕ ಟೆಂಡರ್ ಕರೆಯಲಾಗಿದ್ದು, ಹಾಗೂ ಕ್ರಮ ಸಂಖ್ಯೆ: (2) ಮತ್ತು (3) ರಲ್ಲಿರುವ ಎರಡು ಕಾಮಗಾರಿಗಳನ್ನು ಒಗ್ಗೂಡಿಸಿ ಒಂದು ಪ್ಯಾಕೇಜ್ ಆಗಿ ಟೆಂಡರ್ ಕರೆಯಲಾಗಿದ್ದು, ಇವುಗಳ ಆರ್ಥಿಕ ಬಿಡ್‌ನ್ನು ಅನುಮೋದನೆಗೆ ಮುಖ್ಯ ಇಂಜನಿಯರ್‌ರು (ಈಶಾನ್ಯ ವಲಯ) ಇವರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.<br><br>ಸದರಿ ಆರ್ಥಿಕ ಬಿಡ್‌ಗಳು ಆರ್ಥಿಕ ಇಲಾಖೆಯ ಸಮಾಲೋಚನೆಯೊಂದಿಗೆ ಪರಿಶೀಲನೆಯಲ್ಲಿವೆ. |

ಕಡತ ಸಂಖ್ಯೆ:ಲೋಇ 177 ಸಿಐಎಸ್ 2020 (ಇ)

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ